# ಆದ್ರೆ, ಹಳೇ ಶಾಲು ಏನಾಯ್ತು

**Author:** Arvind Gupta
**Illustrator:** Debasmita Dasgupta
**Translator:** Suhas Hassan Vijayakumar



PRATHAM BOOKS
A Book in Every Child's Hand

ಹಂತ ೩



ಒಂದು ದಿನ ಬುದ್ಧವಿಹಾರದಲ್ಲಿ ನಡೆದಾಡುತ್ತಿದ್ದ ಗೌತಮ ಬುದ್ಧನ ಹತ್ತಿರ ಒಬ್ಬ ಸನ್ಯಾಸಿ ಬಂದು, ಅವನಿಗೆ ಹೊಸದೊಂದು ಶಾಲು ಬೇಕೆಂದು ಕೇಳಿದ.

"ನಿಮ್ಮ ಹಳೇ ಶಾಲು ಏನಾಯಿತು?" ಎಂದು ಬುದ್ಧ ಕೇಳಿದ. ಆಗ, ಆ ಸನ್ಯಾಸಿ, "ಅದು ಬಹಳ ಹಳೆಯದಾಗಿ ಹರಕಲಾಗಿದೆ. ಹಾಗಾಗಿ ಅದನ್ನು ಈಗ ನನ್ನ ಹಾಸಿಗೆಯ ಹೊದಿಕೆಯಾಗಿ ಉಪಯೋಗಿಸುತ್ತಿದ್ದೇನೆ" ಎಂದ.



ಅದಕ್ಕೆ ಬುದ್ಧ, "ಹಾಗಾದರೆ ನಿಮ್ಮ ಹಳೆಯ ಹೊದಿಕೆ ಏನಾಯಿತು?" ಎಂದು ಕೇಳಿದ.

"ಸ್ವಾಮಿ, ಬಹಳ ಕಾಲದಿಂದ ಉಪಯೋಗಿಸಿ,
ಆ ಹೊದಿಕೆ
ತೀರಾ ಹಳೆಯದಾಗಿ, ಇನ್ನೇನು ಹರಿಯುವ
ಹಾಗಿತ್ತು. ಹೀಗಾಗಿ
ಅದನ್ನು ಕತ್ತರಿಸಿ ದಿಂಬಿನ ಚೀಲ ಮಾಡಿದೆ"
ಸನ್ಯಾಸಿ ಉತ್ತರಿಸಿದನು.



"ಆದರೆ ಹೊಸ ದಿಂಬಿನ ಚೀಲ ಬರೋದಕ್ಕೆ
ಮೊದಲು ಹಳೇ
ದಿಂಬಿನ ಚೀಲ ಇತ್ತಲ್ಲ. ಅದೇನಾಯಿತು?"
ಬುದ್ಧ ಕೇಳಿದ.

"ನೂರಾರು ದಿನಗಳಿಂದ ಪ್ರತೀ ದಿನ ಅದರ
ಮೇಲೆ ತಲೆಯಿಟ್ಟು ಮಲಗುತ್ತಿದ್ದೆ.



ಆ ದಿಂಬಿನ ಚೀಲದ ಮೇಲೆ ನನ್ನ ತಲೆ ಸಾವಿರಾರು ಬಾರಿ ಉಜ್ಜಿ, ಅದರಲ್ಲೊಂದು ದೊಡ್ಡ ತೂತಾಗಿತ್ತು. ಈಗದನ್ನು ಕಾಲೊರೆಸುವ ಬಟ್ಟೆಯಾಗಿ ಮಾಡಿದ್ದೇನೆ" ಎಂದು ಸನ್ಯಾಸಿ ಹೇಳಿದ.



ಬುದ್ಧನಿಗೆ ಈ ಉತ್ತರದಿಂದ ಸಮಾಧಾನವಾಗಲಿಲ್ಲ. ಅವನು ಯಾವಾಗಲೂ ಪ್ರತೀ ವಿಷಯವನ್ನು ಆಳವಾಗಿ ಯೋಚಿಸುತ್ತಿದ್ದ.

ಅವನು ಸನ್ಯಾಸಿಯನ್ನು ಕೇಳಿದ, "ನೀನು ಕಾಲೊರೆಸುತ್ತಿದ್ದ ಬಟ್ಟೆ ಏನಾಯಿತು, ಹೇಳು."



ಸನ್ಯಾಸಿ ತನ್ನ ಕೈಮುಗಿದು, "ಸ್ವಾಮಿ, ಹಳೆಯ
ಕಾಲೊರೆಸುವ ಬಟ್ಟೆ ಬಹಳ ದಿನಗಳ ಬಳಕೆಯಿಂದ ಹರಿದುಹೋಗಿತ್ತು.
ಅದರ ದಾರದ ಎಳೆಗಳೆಲ್ಲಾ
ಬಿಡಿಬಿಡಿಯಾಗಿ ಹೊರಬಂದಿದ್ದವು. ಅವುಗಳನ್ನೆಲ್ಲಾ ತೆಗೆದು ಬತ್ತಿಯಾಗಿ
ಹೊಸೆದೆ. ಆ ಬತ್ತಿಯನ್ನು ಎಣ್ಣೆಯಲ್ಲಿ ಅದ್ದಿ
ದೀಪ ಉರಿಸಿದೆ" ಎಂದ.

ಇದನ್ನು ಕೇಳಿದ ಬುದ್ಧ ನಸುನಕ್ಕು, ಸನ್ಯಾಸಿಗೆ ಹೊಸ ಶಾಲು ಕೊಟ್ಟ!




## ನಿಮ್ಮದೇ ಒಂದು ಬಟ್ಟೆಯ ಚೆಂಡನ್ನು ಮಾಡುವಿರಾ?

1. ಮನೆಯಲ್ಲಿರುವ ಹಳೆಯ ಬಟ್ಟೆಗಳನ್ನು ತೆಗೆದುಕೊಳ್ಳಿ. ಅದರಿಂದ ಚಿತ್ರದಲ್ಲಿ ತೋರಿಸಿರುವಂತೆ 2 ಪೆಂಟಗಾನ್ (ಪಂಚಕೋನ ಆಕೃತಿ) ಮತ್ತು 5 ದಳಗಳ ಆಕೃತಿಗಳನ್ನು ಕತ್ತರಿಸಿಕೊಳ್ಳಿ.

2. ಕತ್ತರಿಸಿದ ಬಟ್ಟೆಯನ್ನು ಚಿತ್ರದಲ್ಲಿರುವಂತೆ ಇಟ್ಟು ಕೊನೆಗಳನ್ನು ಹೊಲಿಯಿರಿ ಅಥವಾ ಮನೆಯಲ್ಲಿ ಯಾರಾದರೂ ದೊಡ್ಡವರಿದ್ದರೆ, ಅವರಿಗೆ ಹೊಲಿದು ಕೊಡಲು ಕೇಳಿ. ಒಂದು ಪೆಂಟಗಾನಿನ ಮಧ್ಯದಲ್ಲಿ ಒಂದು ಸಣ್ಣ ತೂತು ಮಾಡಿರಿ.






3. ಹೊಲಿದ ಬಟ್ಟೆಯನ್ನು ಉಲ್ಟಾ
(ತಿರುಗು-ಮುರುಗು) ಮಾಡಿ.

4. ಗಟ್ಟಿಯಾದ ಬಲೂನ್ ಒಂದನ್ನು ತೂತಿನ ಮೂಲಕ ನಿಮ್ಮ ಬಟ್ಟೆಯ ಚೀಲದೊಳಗೆ ತೂರಿಸಿ, ಅದರೊಳಗೆ ಗಾಳಿ ತುಂಬಿ.






5. ಗಾಳಿ ತುಂಬಿದ ಬಲೂನಿನ ಬಾಯನ್ನು ತಿರುಚಿ, ಗಂಟು ಕಟ್ಟಿಬಿಡಿ.

6. ಅರೆರೆ! ನಿಮ್ಮ ಚೆಂದದ ಚೆಂಡು ಆಟವಾಡಲು ಸಿದ್ಧ!





1.

## ಬಣ್ಣ ಬದಲಿಸುವ ಮಾಯಾ ದಾರ!

ಉಣ್ಣೆಯ ದಾರ ಬಳಸಿ ಗಂಟೆಗಟ್ಟಲೆ ಮಜಾ
ಮಾಡಬಹುದಾದ ಆಟಿಕೆ ಇಲ್ಲಿದೆ ನೋಡಿ

1. ಒಂದು ಖಾಲಿ ಕಡ್ಡಿಪೆಟ್ಟಿಗೆ ತೆಗೆದುಕೊಳ್ಳಿ.

2. ಸುಮಾರು 70cm ಉದ್ದದ ದಾರ ತೆಗೆದುಕೊಂಡು,
ಪೆಟ್ಟಿಗೆಯ ಒಂದು ಕೊನೆಯಿಂದ ಮುಂದಿನ ಬದಿಯ ಇನ್ನೊಂದು ಕೊನೆಗೆ,
ಚಿತ್ರದಲ್ಲಿ ತೋರಿಸಿರುವಂತೆ ತೂರಿಸಿ.




3.

3. ಬೇರೆ ಬಣ್ಣದ ಇನ್ನೊಂದು ದಾರ ತೆಗೆದುಕೊಂಡು ಉಳಿದಿರುವ ಕೊನೆಗಳಲ್ಲಿ ತೂರಿಸಿ, ಎರಡೂ ದಾರಗಳ ಕೊನೆಯನ್ನು ಕಟ್ಟಿಬಿಡಿ.

4. ಈಗ ನಿಮ್ಮ ಸ್ನೇಹಿತರಿಗೆ ದಾರದ ಎರಡೂ ಕೊನೆಯನ್ನು ಹಿಡಿದುಕೊಳ್ಳಲು ಹೇಳಿ, ನಿಧಾನವಾಗಿ ನೀವು ಕಡ್ಡಿಪೆಟ್ಟಿಗೆಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಜಾರಿಸಿ.


4.




5. ಏನಿದು ಆಶ್ಚರ್ಯ! ಪೆಟ್ಟಿಗೆಯಿಂದ ಹೊರಗೆ ಬರುತ್ತಿರುವ ದಾರ ತನ್ನ ಬಣ್ಣ ಬದಲಾಯಿಸುತ್ತಿರುವಂತೆ ಕಾಣುತ್ತಿದೆ.

*ಇಂತಹ ಇನ್ನು ಹಲವು ಯೋಜನೆಗಳನ್ನು*
*www.arvindguptatoys.com ಇಂದ ಉಚಿತವಾಗಿ ಪಡೆಯಿರಿ.*



## ಮರುಬಳಕೆಯ ಮಹತ್ವ

ನಾವು ಬಹಳಷ್ಟು ವಸ್ತುಗಳನ್ನು ಸರಿಯಾಗಿ ಯೋಚಿಸದೆಯೇ ಖರೀದಿಸಿ, ಉಪಯೋಗಿಸಿ, ಬಿಸಾಡುತ್ತೇವೆ. ನಮ್ಮ ಅವಶ್ಯಕತೆ ಎಷ್ಟಿದೆಯೋ ಅದಕ್ಕೂ ಮೀರಿ ವಸ್ತುಗಳನ್ನು ಕೊಳ್ಳುತ್ತೇವೆ. ಇತ್ತೀಚೆಗಂತೂ, "ಇನ್ನೂ ಬೇಕು, ಉಪಯೋಗಿಸಿ ಬಿಸಾಕು" ಎನ್ನುವುದೇ ನಮ್ಮ ಮಂತ್ರವಾಗಿದೆ.

ಭೂಮಿಯ ನೈಸರ್ಗಿಕ ಸಂಪನ್ಮೂಲಗಳಾದ ನೀರು, ಮರ, ಮಣ್ಣು, ಮರಳನ್ನು ದುರುಪಯೋಗಿಸುತ್ತೇವೆ. ಇದರಿಂದ ರಾಶಿ ರಾಶಿ ಕಸದ ಉತ್ಪಾದನೆ ಆಗುತ್ತಿದೆ.



ಆದರೆ ಮೊದಲಿನಿಂದಲೂ ನಾವು ಹೀಗೇ ಇದ್ದೇವೆಯೇ? ಭಾರತೀಯರು ಹಿಂದಿನ ಕಾಲದಿಂದಲೂ ಇಷ್ಟು ಬೇಜವಾಬ್ದಾರಿತನದಿಂದ ವರ್ತಿಸುತ್ತಿದ್ದರೇ? ಇಲ್ಲ!
ನಾವು ಬಹಳ ಸಂವೇದನೆಯಿಂದ, ಜವಾಬ್ದಾರಿಯಿಂದ ಅವಶ್ಯಕತೆಗೆ ತಕ್ಕಂತೆ ವಸ್ತುಗಳನ್ನು ಖರೀದಿಸಿ,
ಬಳಸುತ್ತಿದ್ದೆವು ಎಂದು ಇತಿಹಾಸ ಹೇಳುತ್ತದೆ.

ಪ್ರತೀ ವಸ್ತುವನ್ನು ಅನೇಕ ಬಾರಿ, ಅನೇಕ ರೂಪದಲ್ಲಿ ಬಳಸಬಹುದು ಎನ್ನುವುದನ್ನು ಅರಿತಿದ್ದವರು ನಾವು. ಮರುಬಳಕೆಯ ಪರಿಕಲ್ಪನೆ ನಮ್ಮ ಭಾರತೀಯ
ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿದೆ.

ಅಂತಹ ನೀತಿಯನ್ನು ಹೊಂದಿರುವ ಈ ಕಥೆ, ಸುಮಾರು 2500 ವರ್ಷಗಳ ಹಿಂದೆ, ಮಹಾನ್ ಸಾಧು ಮತ್ತು ಗುರುವೂ ಆದ ಗೌತಮ ಬುದ್ಧನ ಕಾಲದಲ್ಲಿ ನಡೆದಿರುವಂತೆ ನಿರೂಪಿಸಲಾಗಿದೆ.

storyweaver PRATHAM BOOKS



## Story Attribution:

This story: ಆದ್ರೆ, ಹಳೇ ಶಾಲು ಏನಾಯ್ತು is translated by Suhas Hassan Vijayakumar . The © for this translation lies with Pratham Books, 2016. Some rights reserved. Released under CC BY 4.0 license. Based on Original story: 'What happened to the shawl?', by Arvind Gupta . © Pratham Books , 2016. Some rights reserved. Released under CC BY 4.0 license.

## Other Credits:

'Aadre Hale Shaalu Enaaytu?' has been published on StoryWeaver by Pratham Books. The development of this book has been supported by Mahle Behr India Pvt Ltd. www.prathambooks.org

## Illustration Attributions:

Cover page: Two monks standing together in a garden and smiling by Debasmita Dasgupta © Pratham Books, 2016. Some rights reserved. Released under CC BY 4.0 license. Page 2: Buddha in confusion and thinking on some questions by Debasmita Dasgupta © Pratham Books, 2016. Some rights reserved. Released under CC BY 4.0 license. Page 3: Two monks standing together and smiling by Debasmita Dasgupta © Pratham Books, 2016. Some rights reserved. Released under CC BY 4.0 license. Page 4: A monk talking to Buddha about a bed, by Debasmita Dasgupta © Pratham Books, 2016. Some rights reserved. Released under CC BY 4.0 license. Page 5: A monk sleeping on the floor, by Debasmita Dasgupta © Pratham Books, 2016. Some rights reserved. Released under CC BY 4.0 license. Page 6: Feet of three people with one pair on a pillow, by Debasmita Dasgupta © Pratham Books, 2016. Some rights reserved. Released under CC BY 4.0 license. Page 7: A Buddhist monk in deep thought, by Debasmita Dasgupta © Pratham Books, 2016. Some rights reserved. Released under CC BY 4.0 license. Page 8: Buddha gifting a shawl to a monk, by Debasmita Dasgupta © Pratham Books, 2016. Some rights reserved. Released under CC BY 4.0 license. Page 9: Two objects, one in pieces and the other stitched together, by Debasmita Dasgupta © Pratham Books, 2016. Some rights reserved. Released under CC BY 4.0 license. Page 10: Two objects made of pieces of cloth, one with a balloon, by Debasmita Dasgupta © Pratham Books, 2016. Some rights reserved. Released under CC BY 4.0 license.

# ಆದ್ರೆ, ಹಳೇ ಶಾಲು ಏನಾಯ್ತು

(Kannada)

ಮಹಾನ್ ಸಂತನಾದ ಗೌತಮ ಬುದ್ಧನ ಜೀವನದಿಂದ ಆರಿಸಿಕೊಳ್ಳಲಾದ, ಈ ಕಥೆಯು ಮರುಬಳಕೆಯ, ಪರಿಸರ ಸಂರಕ್ಷಣೆಯ ನೀತಿಯನ್ನು ಹೊಂದಿದೆ. ಬುದ್ಧನಿಂದ ಹೊಸದೊಂದು ಶಾಲು ಪಡೆಯುವುದು ಅಷ್ಟು ಸುಲಭದ ಮಾತಲ್ಲ ಎಂದು ಒಬ್ಬ ಸನ್ಯಾಸಿ ಹೇಗೆ ಕಲಿತ ಎಂಬ ಕಥೆಯನ್ನು ನೀವೇ ಓದಿ ತಿಳಿಯಿರಿ!

ಇದು ಮೂರನೆ ಹಂತದ ಪುಸ್ತಕ. ತಾವಾಗಿಯೆ ಓದಲು ಸಿದ್ಧವಿರುವ ಮಕ್ಕಳಿಗಾಗಿ.

